# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 828

ಮಾನ್ಯ ಸದಸ್ಯರ ಹೆಸರು : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 20-12-2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

* * *

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆಶಾ ಕಾರ್ಯಕರ್ತೆಯರಿಗೆ ಸರ್ಕಾರದಿಂದ ಕರ್ತವ್ಯದ ಅವಧಿಯನ್ನು ನಿಗದಿಗೊಳಿಸಲಾಗಿದೆಯೇ; | ಆಶಾ ಕಾರ್ಯಕರ್ತೆಯರು ಮಾನ್ಯತೆ ಪಡೆದ ಸಾಮಾಜಿಕ ಆರೋಗ್ಯ ಕಾರ್ಯಕರ್ತೆಯಾಗಿದ್ದು, ಸ್ವಯಂ ಸೇವಾ ನೆಲೆಗಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಇವರು ಇಲಾಖೆಯ ತಾತ್ಕಾಲಿಕ/ ಗುತ್ತಿಗೆ/ಹೊರಗುತ್ತಿಗೆ ನೌಕರರಾಗಿರುವುದಿಲ್ಲ. ತುರ್ತು ವೈದ್ಯಕೀಯ ಸಂದರ್ಭಗಳನ್ನು ಹೊರತುಪಡಿಸಿ ದಿನಕ್ಕೆ 2-3 ಗಂಟೆಗಳ ಸೀಮಿತ ಅವಧಿಯ ಕಾರ್ಯನಿರ್ವಹಣೆಯಾಗಿರುತ್ತದೆ. ಮಾಗಡಿ ತಾಲ್ಲೂಕಿನ ಆಶಾ ಕಾರ್ಯಕರ್ತೆಯರಿಗೆ ಪ್ರತ್ಯೇಕವಾಗಿ ಕರ್ತವ್ಯದ ಅವಧಿಯನ್ನು ನಿಗದಿಪಡಿಸಿರುವುದಿಲ್ಲ, |
| ಆ | ಸದರಿ ಆಶಾ ಕಾರ್ಯಕರ್ತೆಯರಿಗೆ ದಿನದಲ್ಲಿ 12 ಗಂಟೆಗಳ ಅವಧಿಯಲ್ಲಿ ಕರ್ತವ್ಯ ಮಾಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದಲ್ಲಿ 12 ಗಂಟೆಗಳ ಅವಧಿಯಲ್ಲಿ ಕೆಲಸ ಮಾಡಿಸಲು ಕಾನೂನು ಇದೆಯೇ; | ಇಲ್ಲ.<br>ಆಶಾ ಕಾರ್ಯಕರ್ತೆಯರು ಸ್ವಯಂ ಸೇವಾ ನೆಲೆಗಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಸ್ಥಳೀಯ ಅಗತ್ಯತೆ ಮತ್ತು ಸಮುದಾಯದ ಬೇಡಿಕೆಗೆ ಅನುಗುಣವಾಗಿ ಕರ್ತವ್ಯ ನಿರ್ವಹಿಸಬೇಕಾಗಿರುವುದರಿಂದ ಇವರಿಗೆ ನಿರ್ದಿಷ್ಟವಾದ ಕರ್ತವ್ಯದ ಅವಧಿಯಿರುವುದಿಲ್ಲ. |
| ಇ | ಪ್ರಸ್ತುತ ಆಶಾ ಕಾರ್ಯಕರ್ತೆಯರಿಗೆ ಸರ್ಕಾರದಿಂದ ನೀಡಲಾಗುತ್ತಿರುವ ವೇತನ/ಭತ್ಯೆ ಎಷ್ಟು; ಇದನ್ನು ಹೆಚ್ಚಿಸಲು ಸರ್ಕಾರ ಯಾವುದಾದರೂ ಕ್ರಮ ಕೈಗೊಂಡಿದೆಯೇ? (ವಿವರ ನೀಡುವುದು) | ಆಶಾ ಕಾರ್ಯಕರ್ತೆಯರು ಮಾನ್ಯತೆ ಪಡೆದ ಸಾಮಾಜಿಕ ಕಾರ್ಯಕರ್ತೆಯಾಗಿದ್ದು, ಸ್ವಯಂ ಪ್ರೇರಿತ ನೆಲೆಗಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರಿಗೆ ರಾಜ್ಯ ಸರ್ಕಾರ ಮತ್ತು ರಾಷ್ಟ್ರೀಯ ಆರೋಗ್ಯ ಅಭಿಯಾನದಿಂದ ಗೌರವಧನ ಮತ್ತು ಪ್ರೋತ್ಸಾಹಧನಗಳನ್ನು ನೀಡಲಾಗುತ್ತಿದೆ.<br>**ವಿವರಗಳು ಕೆಳಗಿನಂತಿವೆ.:**<br>ಎ) ರಾಜ್ಯ ಸರ್ಕಾರದಿಂದ ಮಾಸಿಕ ನಿಶ್ಚಿತ ಗೌರವಧನ ರೂ.4000/- ಗಳನ್ನು ನೀಡಲಾಗುತ್ತಿದೆ. (12 ಷರತ್ತುಗಳನ್ನು ವಿಧಿಸಲಾಗಿದೆ)<br>ಬಿ) ರಾಷ್ಟ್ರೀಯ ಆರೋಗ್ಯ ಅಭಿಯಾನದಿಂದ ಎಂಟು ಆವರ್ತಕ ಮತ್ತು ನಿಯಮಿತ ಚಟುವಟಿಕೆಗಳಿಗೆ ಮಾಸಿಕ ನಿಶ್ಚಿತ ಪ್ರೋತ್ಸಾಹಧನ ರೂ.2000/-ಗಳನ್ನು ನೀಡಲಾಗುತ್ತಿದೆ.<br>ಸಿ) ಕೋವಿಡ್-19 ರ ನಿಯಂತ್ರಣ ಚಟುವಟಿಕೆಗಳಿಗೆ ಮಾಸಿಕ |

| | | |
|---|---|---|
| | | ಪ್ರೋತ್ಸಾಹಧನ ರೂ,1000/- ಗಳನ್ನು ನೀಡಲಾಗುತ್ತಿದೆ.<br>ಡಿ) ಮೇಲ್ಕಂಡ ನಿಶ್ಚಿತ ಗೌರವಧನ ಮತ್ತು ಪ್ರೋತ್ಸಾಹಧನವನ್ನು ಹೊರತುಪಡಿಸಿ 29 ಚಟುವಟಿಕೆಗಳಿಗೆ ಕಾರ್ಯಕ್ಷಮತೆಯ ಆಧಾರದ ಕಾರ್ಯ ನಿರ್ವಹಣಾ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.<br>ಇ) ಸನ್ಮಾನ್ಯ ಮುಖ್ಯ ಮಂತ್ರಿಗಳ ಕೋವಿಡ್-19ರ 2ನೇ ಪ್ಯಾಕೇಜ್‌ನಲ್ಲಿ ರೂ.3000/-ಗಳ ಏಕಗಂಟಿನ ಪರಿಹಾರಧನವನ್ನು ನೀಡಲಾಗಿದೆ.<br><br>ಹೊಸ ಹೊಸ ಚಟುವಟಿಕೆಗಳು ಸೇರ್ಪಡೆಗೊಂಡ ಸಂಧರ್ಭದಲ್ಲಿ ಚಟುವಟಿಕೆವಾರು ಪ್ರೋತ್ಸಾಹಧನವನ್ನು ನೀಡಲಾಗುತ್ತದೆ. |

ಸಂಖ್ಯೆ: ಆಕುಕ 828 ಚುರಪ್ರ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು